## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 93

ಉತ್ತರಿಸಬೇಕಾದ ದಿನಾಂಕ : 02.02.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕಾರವಾರ ಜಿಲ್ಲೆಯ ಯಲ್ಲಾಪೂರ ತಾಲ್ಲೂಕಿನಲ್ಲಿ ಬುಡಕಟ್ಟು ಜನಾಂಗದ ಆರ್ಥಿಕ ಪುನಶ್ಚೇತನಕ್ಕಾಗಿ ಪ್ರಾರಂಭವಾದ ಸಹ್ಯಾದ್ರಿ ಗಿರಿಜನ ಲ್ಯಾಂಪ್ಸ್ ಸೊಸೈಟಿಯಲ್ಲಿ ದೊಡ್ಡ ಪ್ರಮಾಣದ ಅವ್ಯವಹಾರ ನಡೆದಿರುವ ಬಗ್ಗೆ ಸರ್ಕಾರದ ಗಮನಕ್ಕೆ ಬಂದಿರುತ್ತದೆಯೇ; (ವಿವರ ನೀಡುವುದು) | ಇಲ್ಲ.<br><br>ಆದರೆ ಸರ್ಕಾರದಿಂದ 2020-21ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆ ಯೋಜನೆಯಡಿಯಲ್ಲಿ ದಿನಾಂಕ:12.08.2020 ರಂದು ಬಿಡುಗಡೆಯಾದ ಮೊತ್ತ ರೂ.12.50 ಲಕ್ಷಗಳ ಪೈಕಿ ರೂ.2.00 ಲಕ್ಷಗಳನ್ನು ಜೇನು ಖರೀದಿಗೆ ಬಳಕೆ ಮಾಡಿಕೊಂಡಿದ್ದು, ಈ ಬಗ್ಗೆ ದಿನಾಂಕ: 25.01.2021 ರಂದು ಸಹಕಾರ ಸಂಘಗಳ ಉಪನಿಬಂಧಕರು ಸಂಘದ ಆಡಳಿತ ಮಂಡಳಿಗೆ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗೆ ನೋಟಿಸ್ ಜಾರಿ ಮಾಡಿದ್ದು, ನಂತರ ಜೇನು ಖರೀದಿಗೆ ಬಳಕೆ ಮಾಡಿಕೊಂಡಿದ್ದ, ರೂ.2.00 ಲಕ್ಷಗಳನ್ನು ಸಂಘದ ಬ್ಯಾಂಕಿನ ಖಾತೆಗೆ ದಿನಾಂಕ:25.01.2021ರಂದು ಜಮಾ ಮಾಡಿರುತ್ತಾರೆ. |
| (ಆ) | ಬುಡಕಟ್ಟು ಸಿದ್ದಿ ಸಮುದಾಯದ ಉನ್ನತಿಗಾಗಿ ಸ್ಥಾಪಿತವಾದ ಸಹಕಾರಿ ಸಂಸ್ಥೆಯೊಂದು ಈ ರೀತಿ ಅವನತಿಯ ಅಂಚಿನಲ್ಲಿರುವುದಕ್ಕೆ ಕಾರಣವೇನು; ಆಡಳಿತ ಮಂಡಳಿ ಸಮಿತಿಯೇ ಅಸ್ತಿತ್ವದಲ್ಲಿಲ್ಲದಿದ್ದರೂ ಬ್ಯಾಂಕ್ ಖಾತೆಯಲ್ಲಿ ಅವ್ಯವಹಾರ ಯಥಾವತ್ತಾಗಿ ನಡೆಯುತ್ತಿರುವುದು ನಿಜವೇ; ಸದರಿ ವಿಷಯದಲ್ಲಿ ಆಗಿರುವ ಅವ್ಯವಹಾರದ ಬಗ್ಗೆ ಸರ್ಕಾರ ಸೂಕ್ತ ತನಿಖೆ ಮಾಡುವುದೆ; ಇದಕ್ಕೆ ಬೇಕಾಗುವ ಕಾಲಾವಕಾಶ ಎಷ್ಟು; (ವಿವರ ನೀಡುವುದು) | ಸಹ್ಯಾದ್ರಿ ಗಿರಿಜನರ ದೊಡ್ಡ ಪ್ರಮಾಣ ವಿವಿದೊದ್ದೇಶ ಸಹಕಾರ ಸಂಘ ನಿ. ಯಲ್ಲಾಪುರ ಈ ಸಹಕಾರ ಸಂಘವು ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಸಂಘದಲ್ಲಿ ಆಡಳಿತ ಮಂಡಳಿ ಅಸ್ತಿತ್ವದಲ್ಲಿರುತ್ತದೆ. ಸಂಘದ ಬ್ಯಾಂಕಿನ ಉಳಿತಾಯ ಖಾತೆಯಲ್ಲಿ ಅವ್ಯವಹಾರ ನಡೆದಿರುವುದು ಕಂಡುಬಂದಿರುವುದಿಲ್ಲ.<br><br>ಸದರಿ ಸಹಕಾರ ಸಂಘಕ್ಕೆ ಸರ್ಕಾರದಿಂದ 2020-21ನೇ ಸಾಲಿನಲ್ಲಿ ಲ್ಯಾಂಪ್ಸ್ ಸಹಕಾರ ಸಂಘಗಳ ಮಾರುಕಟ್ಟೆ ಮೂಲಭೂತ ಸೌಕರ್ಯ ಸ್ಥಾಪನೆ ಯೋಜನೆಯಡಿಯಲ್ಲಿ ದಿನಾಂಕ:12.08.2020 ರಂದು ಬಿಡುಗಡೆಯಾದ ಮೊತ್ತ ರೂ.12.50 ಲಕ್ಷಗಳ ಪೈಕಿ ರೂ.2.00 ಲಕ್ಷಗಳನ್ನು ಜೇನು ಖರೀದಿಗೆ ಬಳಕೆ ಮಾಡಿಕೊಂಡಿದ್ದು, ಈ ಬಗ್ಗೆ ದಿನಾಂಕ:25.01.2021 ರಂದು ಸಹಕಾರ ಸಂಘಗಳ ಉಪ ನಿಬಂಧಕರು, ಸಂಘದ ಆಡಳಿತ ಮಂಡಳಿಗೆ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಗೆ ನೋಟಿಸ್ ಜಾರಿ |

| | | |
|---|---|---|
| | | ಮಾಡಿದ್ದು, ನಂತರ ಜೇನು ಖರೀದಿಗೆ ಬಳಕೆ ಮಾಡಿಕೊಂಡಿದ್ದ ರೂ.2.00 ಲಕ್ಷಗಳನ್ನು ದಿನಾಂಕ:25.01.2021 ರಂದು ಬ್ಯಾಂಕಿಗೆ ಜಮಾ ಮಾಡಿರುತ್ತಾರೆ. |
| | | ಗೋದಾಮು ಮತ್ತು ಮಾರಾಟ ಮಳಿಗೆ ನಿರ್ಮಾಣಕ್ಕಾಗಿ ಬಿಡುಗಡೆಯಾದ ಹಣವನ್ನು ಅದೇ ಉದ್ದೇಶಕ್ಕೆ ಬಳಸಿಕೊಳ್ಳದೇ ಬೇರೆ ಉದ್ದೇಶಕ್ಕೆ ಬಳಸಿಕೊಂಡ ಕುರಿತು ಸಂಘದ ಆಡಳಿತ ಮಂಡಳಿಯವರಿಗೆ ಹಾಗೂ ಮುಖ್ಯಕಾರ್ಯನಿರ್ವಹಣಾಧಿಕಾರಿಗೆ ದಿ:25.01.2021 ರಂದು ನೋಟಿಸು ನೀಡಿದ್ದು, ಇನ್ನು ಮುಂದೆ ಈ ರೀತಿ ಆಗದಂತೆ ಕ್ರಮವಹಿಸಲು ಎಚ್ಚರಿಕೆಯನ್ನು ಸಹಕಾರ ಸಂಘಗಳ ಉಪನಿಬಂಧಕರು, ಉತ್ತರ ಕನ್ನಡ ಜಿಲ್ಲೆ ಕಾರವಾರ ಇವರು ನೀಡಿರುತ್ತಾರೆ. |

ಕಡತ ಸಂಖ್ಯೆ: ಸಿಒ 08 ಪಿಎಂಸಿ 2021

**(ಎಸ್. ಟಿ. ಸೋಮಶೇಖರ್)**
ಸಹಕಾರ ಸಚಿವರು.